# ವಿದ್ಯಾರ್ಥಿ ಭಾರತಿ

## ವಾರ್ಷಿಕ ಸಂಚಿಕೆ

ಸಂಪುಟ-೩೦ ISSN-2277-310X ಸಂಚಿಕೆ-೧




ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೨೦೧೯

# ವಿದ್ಯಾರ್ಥಿ ಭಾರತಿ

## ವಾರ್ಷಿಕ ಸಂಚಿಕೆ

ಸಂಪುಟ-೩೦ ಸಂಚಿಕೆ-೦೧

ಪ್ರಧಾನ ಸಂಪಾದಕರು

**ಡಾ. ಧನವಂತ ಹಾಜವಗೋಳ**

ಡಾ. ಆರ್. ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಸಂಪಾದಕರು

**ಡಾ. ಶ್ಯಾಮಲಾ. ರತ್ನಾಕರ**

ಇಂಗ್ಲಿಷ್‌ವಿಭಾಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨೦೧೯

# ವಿದ್ಯಾರ್ಥಿ ಭಾರತಿ

ಸಂಪುಟ-೩೦ ಸಂಚಿಕೆ-೦೧

ಪ್ರಕಟಣಾ ವರ್ಷ - ೨೦೨೦



ರೆಫ್‌ರಿಡ್ ಜರ್ನಲ್ :ISSN -2277-310X



ಪ್ರಕಾಶಕರು

ಡಾ. ಹರಿಲಾಲ ಪವಾರ

ನಿರ್ದೇಶಕರು, ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರತಿಗಳು : ೧೦೦ ಬೆಲೆ : ₹. ೫೦/-

ಮುದ್ರಕರು

ನಿರ್ದೇಶಕರು, ಮುದ್ರಣಾಲಯ

ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೩

# ೧೫. ಶಿಶುನಾಳ ಶರೀಫರ ತತ್ವಪದಗಳಲ್ಲಿ ಮನೋವಿಶ್ಲೇಷಣಾತ್ಮಕ ನೆಲೆ

-ದಾವಲಸಾಬ ನರಗುಂದ

---

ಶಿಶುನಾಳ ಶರೀಫರು ಕನ್ನಡ ಸಾಂಸ್ಕೃತಿಕ ಲೋಕದ ವಿಸ್ಮಯದ ಗಣಿ. ಶರೀಫರ ತತ್ವಪದಗಳಲ್ಲಿ ಮನೋವಿಜ್ಞಾನಕ್ಕೆ ಸಂಬಂಧಿಸಿದಂತೆ ಹಲವಾರು ವಿಷಯಗಳಿರುವುದು ನಮ್ಮ ಅರಿವಿಗೆ ಬರುತ್ತದೆ. ಮನಸ್ಸನ್ನು ಕೇಂದ್ರವಾಗಿಟ್ಟುಕೊಂಡ ಒಬ್ಬ ಮನೋವಿಜ್ಞಾನಿಯಂತೆ ಸಮಾಜದಲ್ಲಿನ ಜನರ ಮನಸ್ಥಿತಿಯನ್ನು ಅರಿತುಕೊಂಡಿದ್ದರು. ಶರೀಫರ ತತ್ವಪದಗಳಲ್ಲಿ ಮನೋ ವಿಜ್ಞಾನ ಎಲ್ಲರನ್ನೂ ಬೆರಗುಗೊಳಿಸುವಂಥದ್ದಾಗಿದೆ. ಶರೀಫರಲ್ಲಿ ಇನ್ನೂರಕ್ಕೂ ಹೆಚ್ಚು ತತ್ವಪದಗಳು ಮನೋವಿಶ್ಲೇಷಣಾತ್ಮಕ ಸಿದ್ಧಾಂತವನ್ನು ಪ್ರತಿಪಾದಿಸುತ್ತವೆ. "ಬಸವಣ್ಣನವರ ವಚನಗಳು ಮನುಷ್ಯನ ಚಿತ್ತಸ್ಥಿತಿಯ ವಿವಿಧ ಮುಖಗಳ ಪ್ರದರ್ಶನ ಶಾಲೆ, ವೇದನೆ, ಕೋಪ, ಛಲ, ಸಂತೋಷ, ಆನಂದ, ಉದ್ವೇಗ, ನಿರಾಶೆ, ಹತಾಶೆ, ವಿನಯ, ಉದ್ಧಟತನ, ಚಾಂಚಲ್ಯ, ಹಠ, ಏಳು ಬೀಳು, ತೃಪ್ತಿ, ಪರಕೀಯತೆ ಈ ಎಲ್ಲ ರಾಗಭಾವಗಳನ್ನು ಅಲ್ಲಿ ಕಾಣುತ್ತೇವೆ" ಎಂದು ಡಾ.ವಿ.ಎಸ್. ಮಾಳಿಯವರು ತಮ್ಮ 'ಬಸವಣ್ಣನವರ ವಚನಗಳಲ್ಲಿ ಮನೋವಿಜ್ಞಾನ' ಎಂಬ ಲೇಖನದಲ್ಲಿ ಮನೋವಿಶ್ಲೇಷಣೆ ಯಾವ ರೀತಿಯಾಗಿ ಕಂಡುಬರುತ್ತದೆ ಎಂಬುದನ್ನು ವಿವರಿಸಿದ್ದಾರೆ. ಅದೇ ರೀತಿಯಾಗಿ ಶರೀಫರ ತತ್ವಪದಗಳ ಮೇಲೂ ಈ ವಚನ ಸಾಹಿತ್ಯದ ನೆರಳು ಬಿದ್ದಿರುವುದನ್ನು ಕಾಣುತ್ತೇವೆ.

ಯಾವುದೇ ಒಂದು ಪ್ರಾಣಿಯನ್ನು ಬೇಟೆಯಾಡುವಂತ ಸಂದರ್ಭದಲ್ಲಿ ಆ ಪ್ರಾಣಿಯ ಚಲನವಲನ, ಹಾವಭಾವ, ಶಕ್ತಿ ಮೊದಲಾದವುಗಳನ್ನು ತಿಳಿಯಬೇಕಾಗುತ್ತದೆ. ಹಾಗೆಯೇ ಶರೀಫರು ಮನುಷ್ಯನೆಂಬ ಪ್ರಾಣಿಯ ಮನಸ್ಸಿನ ಬೇಟೆಗಾರರಾಗಿದ್ದಾರೆ. ಮನಸ್ಸಿನ ನೆಲೆಯನ್ನೇ ಜಾಲಾಡಿಸಿದವರು ಶಿಶುನಾಳದ

ಶರೀಫ ಸಾಹೇಬರು. ಸಮಾಜದಲ್ಲಿನ ಜನರ ಒಲವು ನಿಲುವುಗಳನ್ನು ಪರಿವೀಕ್ಷಿಸಿ ಅಂಕು ಡೊಂಕುಗಳನ್ನು ಅಳೆಯಿಸುವ ಪ್ರಕ್ರಿಯೆಯನ್ನು ನಾವು ಶರೀಫರ ತತ್ವಪದಗಳಲ್ಲಿ ಕಾಣುತ್ತೇವೆ.

ಶರೀಫರು ಮನಸ್ಸಿನ ಹೀನತೆಯನ್ನು ಅರಿತುಕೊಂಡು ಅವರು ಸಮಾಜದಲ್ಲಿನ ಪ್ರತಿಯೊಂದನ್ನು ಕಂಡು, ಕೇಳಿ ಅನುಭವಿಸಿದ್ದರಿಂದ ಮನುಷ್ಯನ ಮನೋಧರ್ಮವನ್ನು ಅರಿಯುವುದು ಸರಳವಾಗಿ ಸಾಧ್ಯವಾಯಿತು.

"ಎಷ್ಟ ಕಾಡತಾವ ಕಬ್ಬಕ್ಕಿ ನಾ
ಹೊಲದಾಗಗಿರುವೇನು ಒಬ್ಬಾಕಿ
ಆ ಕಡೆಯಿಂದ ಬರತಾವ ಮೂರುಹಕ್ಕಿ
ಅವನ್ನ ಕಾದುಕಾದು ನನಗ ಬ್ಯಾಸರಿಕಿ
ಕಬ್ಬಕ್ಕಿ ಬರತಾವ ಸರಿಬೆರಕಿ
ಕವಣಿ ಬೀಸಿ ಬೀಸಿ ಬಂತೆನಗ ಬ್ಯಾಸರಿಕಿ"[೨]

ಎಂದು ಶರೀಫರು ಈ ಪದದಲ್ಲಿ ಕೃಷಿಪರವಾದ ಕಾಳಜಿಯನ್ನು ವ್ಯಕ್ತಪಡಿಸಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಸುಗ್ಗಿಕಾಲದಲ್ಲಿ ಹೊಲದಲ್ಲಿ ಬೆಳೆದು ನಿಂತಿರುವ ಹಾಲ್ದೆನೆಯ ಕಾಳನ್ನು ತಿನ್ನಲು ಹಕ್ಕಿಗಳು ತಂಡೋಪತಂಡವಾಗಿ ಬೇರೆ ಬೇರೆ ನೆಲೆಗಳಿಂದ ಅರಸಿಕೊಂಡು ಬರುತ್ತವೆ. ಹೊಲದ ಮಾಲೀಕನಿಗೆ ಇದೊಂದು ತಲೆನೋವಾಗಿರುತ್ತದೆ. ಆತ ಆ ಹಕ್ಕಿಗಳನ್ನು ಓಡಿಸಲು 'ಕವಣಿ' ಎಂಬ ಸಾಧನವನ್ನು ತಯಾರು ಮಾಡಿಕೊಂಡಿರುತ್ತಾನೆ. ಹೊಲದ ಮಧ್ಯದಲ್ಲಿರುವ ಎತ್ತರವಾದ ಸ್ಥಳದ ಮೇಲೆ ನಿಂತು ಉದ್ದನೆಯ ಹಗ್ಗದ ನಡುವೆ ಕೊಕ್ಕೆಯನ್ನು ಹೆಣೆದು ಅದನ್ನು ಒಂದು ಕೈಗೆ ಇಲ್ಲವೇ ಮುಂಗೈಗೆ ಸುತ್ತಿಕೊಳ್ಳುತ್ತಾರೆ. ಹಗ್ಗದ ಗಂಟಿಗೆ ಮಣ್ಣಿನ ಹೆಂಟೆ ಅಥವಾ ಕಲ್ಲಿನ ತುಂಡನ್ನು ಇಟ್ಟು ಬೀಸಿ ಒಗೆಯುತ್ತಾರೆ. ಆಗ ಮಣ್ಣಿನ ಹೆಂಟೆ ಒಡೆದು ಅಥವಾ ಕಲ್ಲು ಹಕ್ಕಿಗಳಿಗೆ ತಾಗುತ್ತದೆ. ಆಗ ಹಕ್ಕಿಗಳು ಹಾರಿ ಹೋಗುತ್ತವೆ. ಶರೀಫರು ಈ ಪದ್ಯವನ್ನು ಮನುಷ್ಯನ ಮನಸ್ಸಿಗೆ ರೂಪಕವಾಗಿ 'ಕಬ್ಬಕ್ಕಿ'ಗಳನ್ನು ಬಳಸಿದ್ದಾರೆ. 'ಕಬ್ಬಕ್ಕಿ' ಎಂದರೆ ಒಂದು ಜಾತಿಯ ಕಪ್ಪಾದ ಪುಟ್ಟ ಹಕ್ಕಿಯಾಗಿದೆ. ಮನುಷ್ಯನ ಬದುಕನ್ನು ಎಚ್ಚರ ತಪ್ಪಿಸುವ, ಅವನ ಬದುಕನ್ನು ಕುಕ್ಕುವ, ಬಾಯಿ ಹಾಕುವ ಅರಿಷಡ್ವರ್ಗಗಳನ್ನು ಕಬ್ಬಕ್ಕಿಯ ರೂಪದಲ್ಲಿ ಹೇಳಿದ್ದಾರೆ. ಮತ್ತು ಆ ಕಬ್ಬಕ್ಕಿಯ ಬಣ್ಣ ಕಪ್ಪು. ಈ ಕಪ್ಪು ಬಣ್ಣ ಕತ್ತಲು, ಅಜ್ಞಾನದ ಸಂಕೇತವಾಗಿರುವುದನ್ನು ನಾವು ಅನುಭಾವಿಕ ನೆಲೆಯಲ್ಲಿ ಕಾಣುತ್ತೇವೆ.

ನಾವು ಎಷ್ಟೇ ತಟಸ್ಥರಾಗಿದ್ದೇವೆ ಎಂದರೂ ನಮಗರಿವಿಲ್ಲದಂತೆ ಅರಿಷಡ್ವರ್ಗಗಳು ಬಂದು ಮುತ್ತಿಕ್ಕುತ್ತವೆ. 'ಆ ಕಡೆಯಿಂದ ಬರತಾವ ಮೂರು ಹಕ್ಕಿ' ಎಂಬ ಪದದಲ್ಲಿ ಮಾಯೆಯ ರೂಪದಲ್ಲಿರುವ ಈಶಣತ್ರಯಗಳಾದ ಹೆಣ್ಣು, ಹೊನ್ನು, ಮಣ್ಣು ಎಂಬರ್ಥವನ್ನು ಗ್ರಹಿಸಬೇಕು.

"ಹಾವು ತುಳಿದೇನೆ ಮಾನಿನಿ
ಹಾವು ತುಳಿದೇನೆ!
ಹಾವು ತುಳಿದು ಹಾರಿನಿಂತೆ
ಜೀವ ಕಳವಳಿಸಿತೇ ಗೆಳತಿ
ದೇಹತ್ರಯದ ಸ್ಮೃತಿಯು ತಪ್ಪಿ
ದೇವಾ ನೀನೆ ಗತಿಯೋ ಎಂದೆ..."[೨]

ಪ್ರಸ್ತುತ ಈ ಮೇಲಿನ ಪದ್ಯದಲ್ಲಿ ಶರೀಫರು ಕಾಮವನ್ನು ಹಾವಿನ ರೂಪಕವಾಗಿ ಬಳಸಿದ್ದಾರೆ. ಈ ಹಾವು ಅಂತಿಂಥ ಹಾವಲ್ಲ. ಇಡೀ ಜಗತ್ತನ್ನೇ ತನ್ನ ಸೌಂದರ್ಯದಿಂದ ಕುಣಿಸಿದ್ದು, ಆಡಿಸಿದ್ದು, ದೇವಾನುದೇವತೆಗಳನ್ನು ಬಳಸಿ ನಿಂತದ್ದಾಗಿದೆ. ಈ ಹಾವು ಎನ್ನುವಂಥದ್ದು ಕಾಮನೆಗಳಿಗಿರುವ ಪ್ರತೀಕಾತ್ಮಕ ಸಂಬಂಧವಾಗಿದೆ. ಅದರ ಪೌರಾಣಿಕತೆಯನ್ನು ಶರೀಫರು ಈ ಮೇಲಿನ ಪದ್ಯಕ್ಕೆ ಅಳವಡಿಸಿಕೊಂಡಿರುವಂಥದ್ದು ಕೌಶಲ್ಯ ಪೂರ್ಣವಾಗಿದೆ.

ಶರೀಫರು ಬಳಸುವಂಥ ಪ್ರಾಣಿ ಪಕ್ಷಿಗಳ ಪ್ರತೀಕಗಳು ಮನೋ ವಿಶ್ಲೇಷಕರಿಗೂ ಸಜೀವ ಚಿತ್ರಗಳಾಗಿ ಕಂಡಿವೆ. ಈ ಪದದಲ್ಲಿ ಮಾನವನು ಸಾಧನೆ ಮಾಡುವಂಥ ಸಂದರ್ಭದಲ್ಲಿ ಸಾಧನಾ ಮಾರ್ಗಕ್ಕೆ ಅಡ್ಡಿ ಬರುವ ಲೌಕಿಕ ಭೋಗ ಗಳನ್ನು ಮೆಟ್ಟಿ ನಿಂತು ಆಧ್ಯಾತ್ಮದ ಔನ್ನತ್ಯಕ್ಕೆ ಏರುವ ಪರಿಯನ್ನು ವಿವರಿಸಲಾಗಿದೆ. ಪಾರಮಾರ್ಥಿಕ ಸಿದ್ಧಿಯನ್ನು ಪಡೆಯುವಂತ ಸಂದರ್ಭದಲ್ಲಿ ಮಾನವನು ಲೌಕಿಕ ಸುಖದ ಆಕರ್ಷಣೆಗೆ ಸಿಲುಕಿ ಅರೆಕ್ಷಣವಾದರೂ ಸೋತು ಪರವಸ್ತುವಿನ ಮೇಲೆ ಮೋಹಗೊಳ್ಳುವುದು ಸಹಜವಾಗಿದೆ. ಆ ಸೋತಂಥ ಸಂದರ್ಭದಲ್ಲಿ ಶಿಶುನಾಳ ಶರೀಫ ಸಾಹೇಬರು ಗಾಬರಿ, ಕಳವಳ, ಮೈಮರೆವುಗಳಿಂದ ವರ್ಣಿಸಿದ್ದಾರೆ. ಅರಿಷಡ್ವರ್ಗಗಳಲ್ಲಿ ಒಂದಾದ ಕಾಮವನ್ನು ಮೆಟ್ಟಿ ನಿಲ್ಲಬೇಕೆನ್ನುವುದು ಇದರ ಒಳಾರ್ಥವಾಗಿದೆ. ಕಾಮವು ಒಮ್ಮಿಂದೊಮ್ಮೆಲೆ ಧಿಕ್ಕರಿಸುವಂಥದ್ದಲ್ಲ. ಅಂದಿನ ಮನೋಧರ್ಮಕ್ಕೆ ತಕ್ಕಂತೆ ಪುರಾಣ ಪ್ರಸಿದ್ಧ ದೈವಗಳಾದ ಹರಿ-ಹರರನ್ನೂ ಬಿಟ್ಟಿಲ್ಲ ಈ ಹಾವು. ಇಲ್ಲಿ ಶರೀಫರಿಗೆ ಬೇಕಾಗಿರುವುದು ಆತ್ಮ ನಿಗ್ರಹವು ಇಂದ್ರಿಯ ಚಾಪಲ್ಯದಿಂದ ದೂರವಿರುವುದಾಗಿದೆ.

ಶರೀಫರು ಹೆಣ್ಣು, ಹೊನ್ನು, ಮಣ್ಣುಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿಲ್ಲ, ಇವ್ಯಾವುಗಳು ಮಿತಿಮೀರಬಾರದು ಎಂದು ಹೇಳಿದ್ದಾರೆ. ಭೋಗದ ಹಾವು ಕೊನೆಗೆ ಸಣ್ಣ ನಾಗರ ಹಾವಿನಂತೆ ಸೋತು ಶರಣಾಗಿ ಶರೀಫರ ಕಾಲಿಗೆ ಸುತ್ತಿಕೊಂಡಿದ್ದು ಲೌಕಿಕವನ್ನು ಗೆದ್ದುದರ ತಾತ್ಪರ್ಯವಾಗಿದೆ. ಕಾಮಾಸಕ್ತಿ, ಮನಸ್ಸು ಪ್ರಾಪಂಚಿಕ ಮೌಲ್ಯಗಳಾದರೆ ಭಕ್ತಿ, ಮುಕ್ತಿ, ಆಧ್ಯಾತ್ಮ ಸಾಧನೆಗಳು ಪಾರಮಾರ್ಥಿಕ ಮೌಲ್ಯಗಳಾಗಿರುವುದನ್ನು ಈ ಕೆಳಗಿನ ಪದದಲ್ಲಿ ಮೂಡಿ ಬಂದಿವೆ.

"ಮನಸೇ ಮನಸಿನ ಮನಸ ನಿಲ್ಲಿಸುವುದು
ಮನಸಿನ ಮನ ತಿಳಿಯುವ ಮನ ಬ್ಯಾರೆಲೋ ಮನಸೇ
ತನುತ್ರಯದೊಳು ಸುಳಿದಾಡುವ ಜೀವದ
ಗುಣವರಿತರೆ ನಿಜ ಬ್ಯಾರೆಲೋ ಮನಸೇ..."[೩]

ಮಾನವನ ಮನಸ್ಸು ಚಂಚಲ ಮತ್ತು ಸದಾ ಕಾಲ ಏನಾದರೊಂದು ನೆನೆಯುತ್ತ ಇರುತ್ತದೆ. ಮನುಷ್ಯನ ಅಂತರಂಗದಲ್ಲಿ ಮೂರು ರೀತಿಯ ಮನಸ್ಸುಗಳಿರುತ್ತವೆ. ಅಂಥ ಮನಸ್ಸಿನ ಮನಸ್ಸನ್ನೇ ತಿಳಿಯುವಂತಹ, ನಿಯಂತ್ರಿಸುವಂತಹ ಅನ್ಯ ಮನಸ್ಸು ಇರುವುದನ್ನು ಕಾಣುತ್ತೇವೆ. ಮನಸ್ಸನ್ನು ಅಂತರಂಗದಲ್ಲಿ ನಿಲ್ಲಿಸಿ ವಾಸನಾರಹಿತನಾದವನೇ ನಿಜವಾದ ಸುಜ್ಞಾನಿ ಎಂಬುದನ್ನು ಈ ಪದದಲ್ಲಿ ಕಂಡುಬರುತ್ತದೆ. ತನುತ್ರಯಗಳಾದ ಸ್ಥೂಲ, ಸೂಕ್ಷ್ಮ, ಕಾರಣ ಈ ಮೂರರಲ್ಲೂ ಹಾಯುವಂಥ ಆತ್ಮದ ಪರಿಯನ್ನರಿತರೆ ವಾಸ್ತವತೆ ಮತ್ತು ಅವಾಸ್ತವತೆ, ಸತ್ಯ ಮತ್ತು ಸುಳ್ಳುಗಳ ಸರಿಯಾದ ಅರಿವು ಮೂಡುತ್ತದೆ.

ಹೀಗೆ ಮನದ ಕಲ್ಮಶವನ್ನು ತೊಳೆಯುವುದೇ ತ್ರಿಕರಣ ಶುದ್ಧಿಯ ಪರಮೋದ್ಧೇಶವಾಗಿದೆ. ಶರೀಫರು ಇಲ್ಲಿ ಒಬ್ಬ ಮನೋವಿಜ್ಞಾನಿಯಾಗಿ ಜನರ ಮನಸ್ಥಿತಿಗೆ ವಿವಿಧ ರೂಪಕಗಳನ್ನು ಕೊಡುವುದರ ಮೂಲಕ ಅಭಿವ್ಯಕ್ತಿಸಿದ್ದಾರೆ. ಆತ್ಮ ಮತ್ತು ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಲೌಕಿಕ ಜೀವನದ ವಿಷಯ ವಾಸನೆಯನ್ನು ಹೋಗಲಾಡಿಸಬೇಕು. ಇದು ನಿಜವಾದ ಪಾರಮಾರ್ಥಿಕವಾಗಿದೆ. ಮನುಷ್ಯನ ನಿಶ್ಚಲವಾದ ಸ್ಥಿರವಾದ ಮನಸ್ಸು ಆಧ್ಯಾತ್ಮ ಸಾಧನೆಗೆ ಮೊದಲ ಹೆಜ್ಜೆಯಾಗಿದೆ.

'ಮನವೆಂಬೋ ಹೆಣ್ಣಿನ ಕಣ್ಣು ಸನ್ನೆಗೆ ಕಾಮ, ತಾನು ದೇಹದೊಳು ಸುಳಿದಾಡುತಿರೆ ನಿನಗೆ ವಿಷಯ ಸುಖವಾಕ್ಷಣದೊಳು' ಎಂದರೆ ಮನಸ್ಸನ್ನು ಹೆಣ್ಣಾಗಿ ಪ್ರತಿಮೆಯ ರೂಪ ತಾಳಿರುವುದನ್ನು ಒಂದು ಚಿತ್ರದಂತೆ ಕಣ್ಣು ಮುಂದೆ ನಿಲ್ಲುವುದು ಇಲ್ಲಿ ವ್ಯಕ್ತವಾಗುತ್ತದೆ. 'ಅತ್ತ ಇತ್ತ ಹರಿದಾಡುವ ಮನಸ್ಸಿಗೆ ಮೊಚ್ಚಿಲ್ಲೊಡೆದು ನಿಲ್ಲಿಸು

ಜಾಣ' ಎಂಬ ಪದದಲ್ಲಿಯೂ ಕೂಡ ಮನೋವಿಶ್ಲೇಷಣೆಯ ತಂತ್ರವನ್ನು ಕಾಣಬಹುದಾಗಿದೆ. ದೈವವನ್ನು ಮರೆತು ಭೋಗ ಜೀವನದ ಸುಖದಲ್ಲಿಯೇ ಸದಾ ಮುಳುಗಿರುವ ಮನುಷ್ಯ ಮತ್ತು ಆತನ ಅಂತರಂಗದಲ್ಲಿರುವ ಮನಸ್ಸಿಗೆ ಸದಾಚಾರ ಎಂಬ ಮೊಚ್ಚೆಯಿಂದ ಹೊಡೆದು ಅದನ್ನು ಸರಿ ದಾರಿಗೆ ತರಬೇಕು. ಮನಸ್ಸು ಮತ್ತು ಕಾಮದ ನಿಗ್ರಹವನ್ನು ಹಲವಾರು ತತ್ವಪದಗಳಲ್ಲಿ ಶರೀಫರು ಕಟ್ಟಿಕೊಟ್ಟಿದ್ದಾರೆ.

ದೈವ ಮತ್ತು ಆತ್ಮ ಸಾಕ್ಷಾತ್ಕಾರದ ಹುಡುಕಾಟದಲ್ಲಿ ಬೇಯುತ್ತಿದ್ದ ಶರೀಫರು ಜೀವನದುದ್ದಕ್ಕೂ ಇವುಗಳ ಸಾಧನೆಗೆ ತಮ್ಮನ್ನು ತಾವು ತೊಡಗಿಸಿಕೊಂಡರು. ಸೃಷ್ಟಿಯ ಅಂತರಂಗ ಮತ್ತು ಬಹಿರಂಗಗಳಲ್ಲಿ ವ್ಯಾಪಿಸಿರುವ ಪರಮಾತ್ಮ ತತ್ವದ ಹುಡುಕಾಟದಲ್ಲಿ ಹೊರಟಿದ್ದು, ಬಳಲಿದ್ದು ಅಂಥ ಸಂದರ್ಭದಲ್ಲಿ ಗುರುವಿನ ಸಹಾಯ ತಮ್ಮ ಕೈ ಹಿಡಿದು ಕಾಪಾಡಿದ್ದು ಶರೀಫರು ಈ ಸೃಷ್ಟಿಯ ಮುಂದೆ ತೋಡಿಕೊಳ್ಳುತ್ತಾರೆ.

"ಹುಚ್ಚುನಾಯಿ ಬಂದು ಕಚ್ಚುತಿಹುದು ತಂಗಿ
ಎಚ್ಚರದಲ್ಲಿ ದಾರಿ ಹಿಡಿದು ನಡಿ..."[೪]

ಶರೀಫರು ತಮ್ಮ ಪದಗಳಲ್ಲಿ ಹೆಚ್ಚಾಗಿ ಪ್ರಾಣಿ ಸಂಕೇತಗಳನ್ನು ಬಳಸಿರುವುದು ವಿಶೇಷವಾಗಿದೆ. ಸಮಾಜವನ್ನು ಅವರು ಜಾಗೃತಗೊಳಿಸಿರುವ ಶೈಲಿ ವಿಶಿಷ್ಟವಾಗಿದೆ. ಇಲ್ಲಿ 'ಹುಚ್ಚುನಾಯಿ' ಎನ್ನುವಂಥದ್ದು ಕಾಮಾಂಧಕರ ಸಂಕೇತವಾಗಿದೆ. ಹುಚ್ಚುನಾಯಿಯ ರೂಪಕದಲ್ಲಿರುವ ಇಂಥ ಕಾಮಾಂಧಕರು ಸಮಾಜದಲ್ಲಿ ವಿಪುಲರಾಗಿದ್ದಾರೆ. ಕಾಮಾಂಧಕರು ತುಂಬಿದ ಸಮಾಜದಲ್ಲಿ ಬದುಕುವ ಬಗೆಗೆ ಶರೀಫರು ಎಚ್ಚರಿಕೆಯನ್ನು ನೀಡುತ್ತಾರೆ. ಈ ಪದದಲ್ಲಿ ಪ್ರಸ್ತುತ ಸಮಾಜದ ವಾಸ್ತವತೆಯನ್ನು ಪೌರಾಣಿಕ ಹಿನ್ನೆಲೆಯಲ್ಲಿ ಹೇಳಿದ್ದಾರೆ. ಈ ಹುಚ್ಚುನಾಯಿಯು ಹರಿಹರ, ಬ್ರಹ್ಮಾದಿಗಳು, ಋಷಿಮುನಿಗಳನ್ನೂ ಸಹ ಬಿಟ್ಟಿಲ್ಲ. ಎಲ್ಲರನ್ನು ಕಾಡಿದೆ ಮತ್ತು ಈಗಲೂ ಕಾಡುತ್ತಿದೆ. "ಅಹಲ್ಯೆಯನ್ನು ಕಾಮಿಸಿ ದೇವೇಂದ್ರ ಮೈತುಂಬ ರಂಧ್ರವಾಗುವಂತೆ ಶಾಪ ಪಡೆದ. ಮನುಷ್ಯರಾದ ಪಾಂಡವರೇ ವಾಸಿ. ಐದು ಜನ ಒಬ್ಬಳನ್ನೇ ಮದುವೆಯಾಗಿಯೂ ಬುದ್ಧಿಗೆಡಲಿಲ್ಲ. ಈ ನಾಯಿ ಲಕ್ಷ್ಮೀಪುರಕ್ಕೆ (ವೈಕುಂಠ) ಹೋಗುವ ದಾರಿಯಲ್ಲಿ ಅಡ್ಡ ಹಾಕುವಂಥದ್ದು. ಲೋಕದ ಎಲ್ಲ ಜನರ ತೊಡೆಗೆ ಹಲ್ಲು ಹಾಕಿ ಕಚ್ಚುವಂಥದು. ದೇವರ ಕರುಣೆಯಿಂದ ವಿವೇಕದ ಮನೆಯೊಳಗೆ ಅಡಗಿ ಅದರಿಂದ ಪಾರಾಗಬೇಕು ಅಷ್ಟೇ"[೫] ಎಂದು ಹುಚ್ಚುನಾಯಿಯ ರೂಪದಲ್ಲಿರುವ ಕಾಮದ ವಿಚಾರವನ್ನು ಪುರಾಣ ಪ್ರಸಿದ್ಧರನ್ನು ಕಾಡಿದ ಬಗೆಯನ್ನು ಮನೋವಿಶ್ಲೇಷಣಾತ್ಮಕ ರೂಪದಲ್ಲಿ ಹಾಡಿದ್ದಾರೆ.

ಶರೀಫರು ಪ್ರಸ್ತುತ ಜಗತ್ತಿನ ವಾಸ್ತವ ಚಿತ್ರಣವನ್ನೂ ಕೊಡುತ್ತಾರೆ. ಸಮಾಜದಲ್ಲಿರುವ ಮಹಿಳೆಯರಿಗೆ ಅವರ ಜೀವನ ಪಥದಲ್ಲಿ ಎಚ್ಚರದ ನಡಿಗೆ ಇರಬೇಕು ಮತ್ತು ಹುಚ್ಚುನಾಯಿಯ ರೂಪದಲ್ಲಿರುವ ಕಾಮಾಂಧಕರ ಕೈಗೆ ಬಲಿಯಾಗಬಾರದೆಂಬ ಸಂದೇಶವೂ ಕೂಡ ಇದರಲ್ಲಡಗಿದೆ. ಜೊತೆಗೆ ಅಜ್ಞಾನವೂ ಕೂಡ ಈ ನಾಯಿಯ ರೂಪದಲ್ಲಿದೆ. ಶರೀಫರು ತಮ್ಮ ಇನ್ನೊಂದು ತತ್ವಪದದಲ್ಲಿ ರಸಿಕನಾಯಿಯ ಬಗೆಗೆ ಹಾಡುತ್ತಾರೆ. ಇಲ್ಲಿ 'ರಸಿಕನಾಯಿ' ಎನ್ನುವಂಥದ್ದು ಒಂದರ್ಥದಲ್ಲಿ ಹಂಬಲವುಳ್ಳದ್ದು ಎಂದರ್ಥವಾಗುತ್ತದೆ. ಈ ಹಂಬಲ ಕಾಟಾಚಾರದ ಹಂಬಲವಲ್ಲ. ಅಜ್ಞಾನವನ್ನು ತೊಡೆದು ಹಾಕಿ ಜ್ಞಾನವನ್ನು ಪಡೆಯುವ ಹಂಬಲುಳ್ಳ ರಸಿಕನಾಯಿಯಾಗಬೇಕು ಎಂದು ಹೇಳಿದ್ದಾರೆ. "ಅಜ್ಞಾನದಲ್ಲಿ ಮುಳುಗಿರುವ ಇಂದಿನ ಸಮಾಜಕ್ಕೂ ಈ ರಸಿಕತೆ ಅಗತ್ಯವಾಗಿದೆ"[೬] ಎಂಬಂಶವನ್ನು ಶರೀಫರ ಪದದಿಂದ ತಿಳಿದು ಬರುತ್ತದೆ.

"ಚೋಳ ಕಡಿತು ನನಗೊಂದು ಚೋಳ ಕಡಿತು
ಕಾಲ ಕತ್ತಲದೊಳಗ ಕೂಡಿತ್ತು- ನನ್ನ
ಕಂಡು ಬಂತು
ಚೋಳ ಕಡಿತು ನನಗೊಂದು ಚೋಳ ಕಡಿತು..."[೭]

ಯೋಗಜ್ಞಾನದ ಸೂಕ್ಷ್ಮತೆಯನ್ನು ಶರೀಫರು ಈ ತತ್ವಪದದಲ್ಲಿ ಕಟ್ಟಿಕೊಟ್ಟಿದ್ದಾರೆ. ಯೋಗವು ಭಕ್ತಿಯಿಂದಲೇ ಜಾಗೃತವಾಗುತ್ತದೆಂಬುದನ್ನು ಶರೀಫರು ಅರಿತಿದ್ದರು. 'ಚೋಳ ಕಡಿತ'ಕ್ಕೆ ಶರೀಫರು 'ಆಧ್ಯಾತ್ಮಿಕ ಅರ್ಥ'ವನ್ನು, 'ಆಧ್ಯಾತ್ಮಿಕ ಜಾಗೃತಿ'ಯ ಸಂಕೇತವನ್ನು ಕೊಟ್ಟಿದ್ದಾರೆ. ಶರೀಫರು ಅಸ್ಥಿರವಾದ ಮನಸ್ಸಿಗೆ ಸೋರುಮಾಳಿಗೆ, ಚೇಳು, ಮಂಗ, ಕಪ್ಪೆ ಹೀಗೆ ಮೊದಲಾದ ರೂಪಕಗಳನ್ನು ಬಳಸಿದ್ದಾರೆ. ಇಲ್ಲಿ ಚೇಳಿನ ರೂಪಕವನ್ನು, ಹಠಾತ್ತನೇ ಉಂಟಾದ ಆಧ್ಯಾತ್ಮಿಕ ಜಾಗೃತಿಯ ಅರಿವನ್ನು ಚೇಳು ಕಡಿಯುವುದರ ರೂಪಕದ ಮೂಲಕ ಕಟ್ಟಿಕೊಟ್ಟಿದ್ದಾರೆ. "ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳ ಒಳಗಿದ್ದು, ಪರಮಾತ್ಮನೊಳಗೆ ಬೆಳೆದಿದ್ದ ಈ ಜಾಗೃತಿ ಈಗ ಸ್ಥೂಲ ದೇಹದೊಳಗೆ ಮಲಗಿತ್ತು; ದೇವರ ಮನೆಯ ಮೂಲೆಯಲ್ಲಿತ್ತು. ಈಗ ಇದ್ದಕ್ಕಿದ್ದಂತೆ ಊರ್ಧ್ವಮುಖಿಯಾಗಿ, ಮೂರು ಲೋಕ ಬೆಳಗುವಂತೆ ಮೇಲೆ ಬಂದು ಕಚ್ಚಿ, ಹುಚ್ಚು ಹಿಡಿಸಿತು" ಎಂದು ಡಾ. ಎಚ್.ಎ. ಸತ್ಯವತಿಯವರು 'ಶರೀಫರ ಕನ್ನಡ ರಚನೆಗಳ ಭಾಷೆ-ಶೈಲಿ' ಎಂಬ ಲೇಖನದಲ್ಲಿ ಚೇಳಿನ ಪ್ರಸಂಗವನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಿದ್ದಾರೆ. ಮನಃಶಾಸ್ತ್ರೀಯ

ನೆಲೆಯಲ್ಲಿ ವಿವೇಚಿಸಿದಾಗ ಚೇಳು ಮನುಷ್ಯನ ಮನಸ್ಸನ್ನು ಜಾಗೃತಗೊಳಿಸುವ ಜ್ಞಾನದ ಸಂಕೇತವಾಗಿದೆ ಮತ್ತು ಕಾಲ ಕತ್ತಲದೊಳಗೆ ಅಂದರೆ ಮನುಷ್ಯನಲ್ಲಿ ಅಂತರ್ಗತವಾಗಿರುವ ಅಜ್ಞಾನ, ಅಂಧಕಾರದ ಸಂಕೇತವಾಗಿದೆ. ಮನುಷ್ಯನನ್ನು ಜಾಗೃತಗೊಳಿಸಲು ಎಂಬುದನ್ನು ಶರೀಫರು 'ನನ್ನ ಕಂಡು ಬಂತು' ಎಂದು ಹೇಳಿದ್ದಾರೆ. ಈ ಪದದಲ್ಲಿ ಶರೀಫರು ರಹಸ್ಯಾತ್ಮಕ ಸಂವೇದನೆಯನ್ನು ವ್ಯಕ್ತಪಡಿಸಿರುವುದನ್ನು ಕಾಣುತ್ತೇವೆ. ಕಾಳ ಕತ್ತಲದೊಳಗೆ ಕೂತಿದ್ದು, ಎಷ್ಟು ದಿನದ ಸಿಟ್ಟು, ಘಟ್ಟಿಯಾಗಿ ಮುಳ್ಳು ಚುಚ್ಚಿ ಮಾಯವಾದದ್ದು, ಮೂರು ದೇಹದೊಳಗೆ ತಾನಿದ್ದದ್ದು, ದೇವರಾ ಮನಿ ಮೂಲೆಯೊಳಗಿದ್ದದ್ದು, ಊರ್ಧ್ವ ಮುಖಕೆ ಕೊಂಡಿ ಮಾಡಿದ್ದು, ಕಚ್ಚಿದೊಡನೆ ಎಚ್ಚರಾಗಿದ್ದು, ಹುಚ್ಚೇ ಹಿಡಿಯಿತು ಎನ್ನುತ್ತಾರೆ. ಮನುಷ್ಯ ಜೀವನದ ಕತ್ತಲಿನಲ್ಲಡಗಿದ್ದ ಆಧ್ಯಾತ್ಮಿಕ ಸಂಪತ್ತು ಒಮ್ಮಿಂದೊಮ್ಮೆಲೆ ಹೊರ ಜಗತ್ತಿಗೆ ಹರಿದು, ಲೌಕಿಕ ಜಗತ್ತಿನಲ್ಲಿ ದುಃಖ, ಕಷ್ಟ, ಸಾವು, ನೋವು, ಸಂಕಟಗಳನ್ನು ಅನುಭವಿಸುವ ಪರಿಯನ್ನು ಬಹುಮಾರ್ಮಿಕವಾಗಿ ಶರೀಫರ ತತ್ವಪದದಲ್ಲಿ ಕಂಡುಬರುತ್ತದೆ.

"ಗುಡಿಯ ನೋಡಿರಣ್ಣ! ದೇಹದ
ಗುಡಿಯ ನೋಡಿರಣ್ಣ
ಗುಡಿಯ ನೋಡಿರಿದು ಪೊಡವಿಗೆ ಒಡೆಯನು
ಅಡಗಿಕೊಂಡು ಕಡು ಬೆಡಗಿನೊಳಿರುತಿಹ..."[೮]

ಶಿಶುನಾಳ ಶರೀಫರು ಈ ಪದದಲ್ಲಿ ದೇಹವನ್ನು ಒಂದು ಗುಡಿಯಾಗಿ ಕಲ್ಪಿಸಿಕೊಂಡಿದ್ದಾರೆ. ಪ್ರಾಚೀನ ಕಾಲದಿಂದಲೂ ಪುರೋಹಿತಶಾಹಿ ವರ್ಗದವರು ಮಠ, ಮಸೀದಿ, ಇಗರ್ಜಿಗಳಲ್ಲಿ ಮಾತ್ರ ದೇವರಿದ್ದಾನೆಂದು ನಂಬಿಕೊಂಡು ಬಂದಿದ್ದಾರೆ. ಪುರೋಹಿತಶಾಹಿ ವರ್ಗದ ಜನರು ಸಾಮಾನ್ಯ ಜನರ ಅಥವಾ ಭಾವುಕರ ಶೋಷಣೆ ಮಾಡುವುದನ್ನು ಶರೀಫರು ಈ ತತ್ವಪದದಲ್ಲಿ ಅಣಕಿಸಿದ್ದಾರೆ. ದೇಹ ಮತ್ತು ಗುಡಿಯ ವಿಚಾರವಾಗಿ ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರು 'ಉಳ್ಳವರು ಶಿವಾಲಯವ ಮಾಡುವರು, ನಾನೇನ ಮಾಡಲಿ ಬಡವನಯ್ಯ' ಎಂಬ ವಚನದಲ್ಲಿ ಸ್ಥಾವರ ಮತ್ತು ಜಂಗಮದ ಪರಿಕಲ್ಪನೆಯಂತೆಯೇ ಶರೀಫರೂ ಕೂಡ ಜೀವ ಚೈತನ್ಯದ ಬಗ್ಗೆ ಈ ಪದದಲ್ಲಿ ಹಾಡಿದ್ದಾರೆ.

ಶರೀಫರು ತಮ್ಮ ತತ್ವಪದದಲ್ಲಿ ದೇಹವನ್ನು ಸಾಮಾನ್ಯ, ಸಾಧನ, ದೈವತ್ವದ ಭಾಗವಾಗಿ ಕಂಡಿದ್ದಾರೆ. ನಿರ್ಮಲ ದೇಹದ ಮೂಲಕ ನಿರ್ಮಲವಾದ ಗುಡಿ ಸಾಧ್ಯ ಎನ್ನುತ್ತಾರೆ. ಇದರ ಜೊತೆಗೆ ಶರೀಫರು ದೇಹವನ್ನೇ ಮಂದಿರವನ್ನಾಗಿ,

ಮಸೀದಿಯನ್ನಾಗಿ ಮಾಡಿಕೊಂಡು ಬಾಹ್ಯ ಜಗತ್ತಿನ ಈ ಗುಡಿ ಮಸೀದಿಯನ್ನು ನಿರಾಕರಣೆ ಮಾಡಿದರು. 'ಅದ್ವೈತ ತತ್ವ'ವನ್ನು ಪ್ರತಿಪಾದಿಸಿ ಮನುಷ್ಯನಲ್ಲಿರುವ ಆತ್ಮದೊಳಗಿನ ಪರಮಾತ್ಮಕ್ಕೆ ಮತ್ತು ದೇಹಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟರು. 'ದೇಹೋ ದೇವಾಲಯ' ಎಂಬ ಉಪನಿಷತ್ತಿನ ಸಾರವೇ ಪ್ರಸ್ತುತ ಈ ತತ್ವಪದ ಒಳಗೊಂಡಿದೆ. ಶರೀಫರು ಪರಮಾತ್ಮನನ್ನು ದೇಹದ ಗುಡಿಯಲ್ಲಿರುವ ಆತ್ಮದಲ್ಲಿಯೇ ಕಂಡುಕೊಂಡಿದ್ದಾರೆ. 'ಆರು ಮೂರುಗಳನ್ನು ಕಟ್ಟಿ ಮೇಲೇರಿದವನೇ ನಿಜವಾದ ಗಟ್ಟಿಗ'. ಇಲ್ಲಿ ಆರೆಂದರೆ ಅರಿಷಡ್ವರ್ಗಗಳು, ಮೂರೆಂದರೆ ಮಾತು, ಮನಸ್ಸು, ಶರೀರವಾಗಿದೆ.

ದೇಹವೆಂಬ ಗುಡಿಯೊಳಗೆ ಲೋಕದ ಒಡೆಯನಾದ ಪರಬ್ರಹ್ಮನು ಅವಿತುಕೊಂಡು ಬೆಡಗಿನಿಂದ ಕೂತಿದ್ದಾನೆ ಎಂದು ಆತ್ಮ ಮತ್ತು ಪರಮಾತ್ಮನ ಸ್ವರೂಪವನ್ನು ಕುರಿತು ಹೇಳಿದ್ದಾರೆ. "ಶರೀರದಲ್ಲಿ ಆತ್ಮವೊಂದೇ ಮೂಲ ತತ್ವವಾಗಿದ್ದು ಕೇವಲ ಅದರ ಸಂಕಲ್ಪ ಶಕ್ತಿಯಿಂದ ಈ ದೇಹದ ರಚನೆ ಮತ್ತು ನಿರ್ಮಿತಿಯಾಗಿದೆ. ವಿಕಾರಮಯವಾದ ಶರೀರದಲ್ಲಿ ಅವಿಕಾರಿಯಾಗಿಯೂ, ಪರಿವರ್ತನೆಯಾಗುವ ದೇಹದಲ್ಲಿ ಅವಿನಾಶವಾಗಿಯೂ ಅದೊಂದೇ ಇದೆ. ಅದೇ ದೇಹದ ನೈಜ ತತ್ವವಾಗಿದೆ"[೨] ಎಂದು ದೇಹ ಮತ್ತು ಆತ್ಮದ ನಿರ್ಮಿತಿಯನ್ನು ಕುರಿತು ವಿಶ್ಲೇಷಿಸಲಾಗಿದೆ.

ಹೀಗೆ ಶರೀಫರ ತತ್ವಪದ ಸಾಹಿತ್ಯವನ್ನು ಅವಲೋಕಿಸಿದಾಗ ಅದರಲ್ಲಿ ಮನೋವಿಶ್ಲೇಷಣೆಯ ತಂತ್ರ ಅಡಕವಾಗಿರುವುದು ಕಂಡುಬರುತ್ತದೆ. ದೇಹ ಮತ್ತು ಮನಸ್ಸುಗಳನ್ನು ಆಧಾರವಾಗಿಟ್ಟುಕೊಂಡು ಶರೀಫರು ಹಲವಾರು ತತ್ವಪದಗಳನ್ನು ಹಾಡಿದ್ದಾರೆ. ಶರೀಫರು ಆತ್ಮೀಯವಾದ ಮಾತುಗಳಿಂದ ಮತ್ತು ನೇರವಾದ ವಿಡಂಬನೆಯ ಪದಗಳಿಂದ ಜನಸಾಮಾನ್ಯರಲ್ಲಿ ವೈಚಾರಿಕತೆಯನ್ನು ಬೆಳೆಸಿ ಆತ್ಮಾವಲೋಕನ ಮಾಡಿಕೊಳ್ಳುವಂತಹ ಪರಿಸರವನ್ನು ನಿರ್ಮಿಸಿದರು. ತತ್ವಪದ ಸಾಹಿತ್ಯದಲ್ಲಿ ಆತ್ಮಶೋಧನೆಯು ಬಹುಮುಖ್ಯನೆಲೆಯಾಗಿರುವುದರಿಂದ ಸಾಮಾಜಿಕ ವಿಮರ್ಶೆಯ ಜೊತೆಗೆ ಆತ್ಮವಿಮರ್ಶೆಯನ್ನು ಮಾಡಿಕೊಳ್ಳುತ್ತ; ಆತ್ಮಶೋಧನೆಯ ಸಿದ್ಧಾಂತವನ್ನು ಇಲ್ಲಿ ಕಾಣುತ್ತೇವೆ. ಅರಿವಿನಿಂದ ನೀತಿಯಿಂದ ಆಚಾರ ಸಂಪನ್ನರಾಗಿ ಬದುಕಬೇಕೆಂಬುದು ಶಿಶುನಾಳ ಶರೀಫ ಸಾಹೇಬರ ಮೂಲ ಧ್ಯೇಯವಾಗಿದೆ.

**ಅಡಿಟಿಪ್ಪಣಿ :**

೧. ಶಿವಾನಂದ ಗುಬ್ಬಣ್ಣವರ, ಶಿಶುನಾಳ ಶರೀಫರ ಗೀತೆಗಳು, ಪು.೧೨೭

೨. ಡಾ.ಎನ್ ಎಸ್ ಲಕ್ಷ್ಮೀನಾರಾಯಣಭಟ್ಟ, ಶಿಶುನಾಳ ಶರೀಫ ಸಾಹೇಬರ ಗೀತೆಗಳು, ಪು.೩೭

೩. ಅದೇ, ಪು.೩೧
೪. ಅದೇ, ಪು.೪
೫. ಅದೇ, ಪು.೧೧೮
೬. ಕಾ.ವೆಂ.ಶ್ರೀನಿವಾಸಮೂರ್ತಿ, ಶಿಶುನಾಳ ಶರೀಫ ಮತ್ತು ಇತರೆ ಅನುಭಾವಿಗಳು, ಪು.೮೩
೭. ಪೂರ್ವೋಕ್ತ ಪು.೫೩
೮. ಅ.ರಾ.ಸೇ, ಶಿಶುನಾಳ ಶರೀಫರ ನೂರಾರು ತತ್ವದಗಳು, ಪು.೫೨
೯. ಡಾ.ಮಂಜುಳಾ ಮಲ್ಹಾರಿ, ಬೋಧ ಒಂದೇ ಬ್ರಹ್ಮನಾದ ಒಂದೇ, ಪು.೧೨೫

**ಪರಾಮರ್ಶನ ಗ್ರಂಥಗಳು :**

೧. ಶಿಶುನಾಳ ಶರೀಫರ ಗೀತೆಗಳು, ಸಂ: ಡಾ.ಶಿವಾನಂದ ಗುಬ್ಬಣ್ಣವರ, ಅಕ್ಷಯ ಪ್ರಕಾಶನ ಧಾರವಾಡ, ೧೯೯೩.
೨. ಶಿಶುನಾಳ ಶರೀಫ ಮತ್ತು ಸಂತ ಕಬೀರ ಒಂದು ತೌಲನಿಕ ಅಧ್ಯಯನ, ಆರ್.ಪಿ.ಹೆಗಡೆ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೯೪.
೩. ಶಿಶುನಾಳ ಶರೀಫ ಸಾಹೇಬರ ಗೀತೆಗಳು, ಸಂ. ಡಾ. ಎನ್.ಎಸ್. ಲಕ್ಷ್ಮೀ ನಾರಾಯಣಭಟ್ಟ, ಸಪ್ನ ಬುಕ್‌ಹೌಸ್ ಬೆಂಗಳೂರು, ೨೦೧೭.
೪. ಬೋಧ ಒಂದೇ ಬ್ರಹ್ಮನಾದ ಒಂದೇ, ಡಾ.ಮಂಜುಳಾ ಮಲ್ಹಾರಿ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೧೦೧೨.
೫. ಶಿಶುನಾಳ ಶರೀಫ ಮತ್ತು ಇತರೆ ಅನುಭಾವಿಗಳು, ಸಂ. ಕಾ.ವೆಂ. ಶ್ರೀನಿವಾಸಮೂರ್ತಿ, ಕೋಗಿಲೆ ಪ್ರಕಾಶನ ಬೆಂಗಳೂರು, ೨೦೧೧
೬. ಶಿಶುನಾಳರ ಅನುಭಾವ ಗೀತ ಮಂಜರಿ, ಪ್ರ.ಸ: ಕಾವ್ಯಪ್ರೇಮಿ, ಸಮಾಜ ಪುಸ್ತಕಾಲಯ ಧಾರವಾಡ, ೨೦೧೮.

*****